ಡಾ॥ ಚೆನ್ನಕ್ಕ ಎಲಿಗಾರ

# ಬಂಕಾಪುರದ ಇಂದ್ರೇಶ್ವರ ದೇವಸ್ಥಾನ

ಧಾರವಾಡ ಜಿಲ್ಲೆಯ ಶಿಗ್ಗಾಂವ ತಾಲೂಕಿನ ಬಂಕಾಪುರ ಸುಪ್ರಸಿದ್ಧ ಐತಿಹಾಸಿಕ ಸ್ಥಳ. ಇದು ರಾಷ್ಟ್ರಕೂಟ ಕಾಲದಷ್ಟು ಹಿಂದೆಯೆ ರಾಜಧಾನಿಯಾಗಿತ್ತು. ರಾಷ್ಟ್ರಕೂಟ ಸಾಮಂತ ಚಲ್ಲಕೇತನ ವಂಶದ ವೀರ ಬಂಕೇಯನಿಂದ, ಜೈನಧರ್ಮದ ಗುಣಭದ್ರಾಚಾರ್ಯ ವಿರಚಿತ 'ಉತ್ತರಪುರಾಣ'ದಿಂದ ವಿಶೇಷ ಮಹತ್ವ ಹೊಂದಿದೆ. ಕ್ರಿ.ಶ. ೯೨೫ರ ಶ್ರವಣಬೆಳಗೊಳ ಶಾಸನದ ಪ್ರಕಾರ, ಇದು ರಾಷ್ಟ್ರಕೂಟ ನಿತ್ಯವರ್ಷ ನಾಲ್ಕನೆಯ ಗೋವಿಂದನ ಆಳ್ವಿಕೆಗೆ ಬಂಕಾಪುರ ಒಳಪಟ್ಟಿತ್ತು.[1] ರಾಷ್ಟ್ರಕೂಟ ಇಂದ್ರವಲ್ಲಭ ಅಥವಾ ನಾಲ್ಕನೆಯ ಇಂದ್ರನಿಗೆ ಬಂಕಾಪುರದಲ್ಲಿ ಕ್ರಮಬದ್ಧವಾದ ಪಟ್ಟಾಭಿಷೇಕವಾಯಿತು. ಇದು 'ಶ್ರೀಮದಿನ್ದ್ರರಾಜ ಪಟ್ಟಬಂಧೋತ್ಸವ' ಎಂದು ಶಾಸನದಲ್ಲಿ ನೇರವಾಗಿಯೆ ಉಲ್ಲೇಖಿಸಲ್ಪಟ್ಟಿದೆ. ಇಮ್ಮಡಿ ಮಾರಸಿಂಹ ಈ ಇಂದ್ರನನ್ನು ರಾಷ್ಟ್ರಕೂಟ ಸಿಂಹಾಸನದ ಮೇಲೆ ಕುಳ್ಳಿರಿಸಲು ಸರ್ವಪ್ರಯತ್ನ ಕೈಕೊಂಡ. ಆದರೆ ವಿಧಿಬರಹ ಬೇರೆಯಾಗಿತ್ತು. ಮಾರಸಿಂಹನು ಕ್ರಿ. ಶ. ೯೭೫ರಲ್ಲಿ ಬಂಕಾಪುರದಲ್ಲಿ ಮರಣ ಹೊಂದಿದರೆ,[2] ನಾಲ್ಕನೆಯ ಇಂದ್ರನು ಕ್ರಿ. ಶ. ೯೮೨ರಲ್ಲಿ ಮರಣಹೊಂದಿದ.[3] ಇಂದ್ರನ ಮರಣದ ಪ್ರಸ್ತಾಪ ಮಾಡಿದ ಶ್ರವಣಬೆಳಗೊಳ ಶಾಸನವು ಮರಣಸ್ಥಳವನ್ನು ಸೂಚಿಸಿಲ್ಲ. ಆದರೆ ಡಾ॥ ಪಿ.ಬಿ. ದೇಸಾಯಿಯವರು, ಇಂದ್ರನು ತನ್ನ ಕೊನೆಗಾಲದವರೆಗೂ ಬಂಕಾಪುರದಲ್ಲಿಯೆ ಇದ್ದಿರಬೇಕೆಂದಿದ್ದಾರೆ.[4] ಈ ಇಂದ್ರನ ಹೆಸರಿನಲ್ಲಿ ಸ್ಥಾಪಿತವಾದವು ಬಂಕಾಪುರದ ಇಂದ್ರೇಶ್ವರಗೇರಿ, ಇಂದ್ರೇಶ್ವರಪುರ ಹಾಗೂ ಇಂದ್ರೇಶ್ವರ ದೇವಸ್ಥಾನ. ಕ್ರಿ. ಶ. ೧೦೦೭ ರ ಹೊಟ್ಟೂರ ಶಾಸನವು 'ಇಂದ್ರೇಶ್ವರಗೇರಿ'ಯ ಪ್ರಸ್ತಾಪ ಮಾಡಿದರೆ,[5] ಕ್ರಿ.ಶ. ೧೦೬೨ರ ಬಂಕಾಪುರ ಶಾಸನವು 'ಇಂದ್ರೇಶ್ವರಪುರ'ದ ಪ್ರಸ್ತಾಪ ಮಾಡಿದೆ.[6] ಇಂದ್ರೇಶ್ವರ ದೇವಸ್ಥಾನದ ಪ್ರಥಮ ಉಲ್ಲೇಖವು ಕೋಳೂರು ಶಾಸನದಲ್ಲಿದೆ.[7] ಆದರೆ ಇದರ ನಿರ್ಮಾಣದ ಕಾಲ ತಿಳಿದುಬಂದಿಲ್ಲ. ದೇವಾಲಯದ ಪರಿಸರಕ್ಕೆ 'ಪುರ'ವೆಂದು ಕರೆಯಲಾಗುತ್ತಿದ್ದುದರಿಂದ ಇಂದ್ರೇಶ್ವರ ದೇವಾಲಯದ ಪರಿಸರವೇ ಇಲ್ಲಿಯ 'ಇಂದ್ರೇಶ್ವರಪುರ'. ಇಂದ್ರೇಶ್ವರಗೇರಿ ಎಂಬುದು ಇದರ ಇನ್ನೊಂದು ಹೆಸರಾಗಿರಬೇಕು.

---

1 ಎ. ಕ., ೨, ಶ್ರವಣಬೆಳಗೊಳ

2 ಅದೇ, ೬೪

3 ಅದೇ, ೬೩

4 ಅದೇ, ಮುನ್ನುಡಿ

5 ಎ. ಇ., ೧೬, ೧೧ ಹೊಟ್ಟೂರು

6 ಎಸ್. ಆಯ್. ಆಯ್., ೧೮, ೬೬ ಬಂಕಾಪುರ

7 ಎ. ಇ., ೧೫, ೨೫(೬) ಕೋಳೂರು (ಕ್ರಿ.ಶ. ೧೦೪೫)

ಇಂದ್ರೇಶ್ವರ ದೇವಾಲಯವನ್ನು ಕುರಿತು ಈವರೆಗೆ ಆರು ಶಾಸನಗಳು ಲಭ್ಯವಾಗಿದ್ದು, ಇತ್ತೀಚೆಗೆ ನನ್ನ ಗಮನಕ್ಕೆ ಬಂದ ಶಾಸನವನ್ನು (ಅಪ್ರಕಟಿತ) ಸೇರಿಸಿದರೆ ಈ ಸಂಖ್ಯೆ ಏಳಾಗುತ್ತದೆ. ಆ ಶಾಸನಗಳೆಂದರೆ, ೧. ಕದಂಬಾನ್ವಯದ ರಾಜಗುರುದೇವರು ಬಂಕಾಪುರದ ಇಂದ್ರೇಶ್ವರ ದೇವರ್ಗಾಳ್ವ ಪನ್ನೆರಡು ಬಾಡದ ಸುಂಕವನ್ನಾಳುತ್ತಿರಲು ಕೋಳೂರು ಕಲಿದೇವೇಶ್ವರಕ್ಕೆ ಬಿಟ್ಟ ದತ್ತಿ[8]; ೨. ರಾಜಗುರು ವರುಣಶಿವ ಪಂಡಿತ ದೇವ ಶ್ರೀ ಮದ್ಬಂಕಾಪುರದಿಂದ್ರೇಶ್ವರ ದೇವರ್ಗಾಳ್ವ ಪನ್ನೆರಡು ಬಾಡಂ ಸುಖದಿಂದಾಳುತ್ತಿರಲು ಪೆರ್ಗಡೆ ಚಾವುಂಡಯ್ಯ ಇಂದ್ರೇಶ್ವರಪುರದ ಅಧಿಕಾರ ನೋಡುತ್ತಿದ್ದ ಉಲ್ಲೇಖ[9] ; ೩. ಬಂಕಾಪುರದ ಇಂದ್ರೇಶ್ವರ ದೇವರ್ಗಾಳ್ವ ಗೊರವ ಎಂಬ ಉಲ್ಲೇಖ[10]; ೪.ರಾಜಧಾನಿ ಪಟ್ಟಣಂ ಶ್ರೀಮತ್ ಬಂಕಾಪುರದ ಶ್ರೀಮದಿಂದ್ರೇಶ್ವರದಾಚಾರ್ಯ, ಸೋಮರಾವುಳ, ಶಿವಶಕ್ತಿ ಪಂಡಿತರ ಜೊತೆಯಲ್ಲಿ ಮಂಡಳೇಶ್ವರ ಕೀರ್ತಿ ದೇವರಸ, ಕಾಳಲದೇವಿ ಮಹಾಪ್ರಧಾನ ಕುಮಾರ ಮಲ್ಲರಸರು ಇಂದ್ರೇಶ್ವರದೇವರ ನಂದಾದೀವಿಗೆಗೆ ಬಿಟ್ಟ ಸುಂಕದಾನದ ಉಲ್ಲೇಖ[11] ; ೫. ವಾಕಟಿಗವಲ್ಲಿಯ ಸಿದ್ದೇಶ್ವರ ದೇವರ್ಗೆ ಇಂದ್ರೇಶ್ವರದೇವರ್ಗೆ ಬಿಟ್ಟ ದತ್ತಿ[12] ; ೬. ಬಂಕಾಪುರದ ಇಂದ್ರೇಶ್ವರಕೆ ಹಿಡಿಕೇಶ್ವರ ಗ್ರಾಮ ದಾನ.[13]

ಕಲ್ಯಾಣ ಚಾಲುಕ್ಯರ ಕಾಲದ ಬಂಕಾಪುರ ಶಾಸನದಲ್ಲಿ ಈ ಇಂದ್ರೇಶ್ವರ ದೇವಸ್ಥಾನವನ್ನು,

ಧರಣೀನಾರಿಯ ವಕ್ತ್ರದಂತೆ ಬನವಾಸಿದೇಶ
ವೆನ್ದು ನಿರಂ
ತರ ಶೋಭಾಸ್ಪದವಲ್ಲಿ ಕಂಣ್ಗೊಪ್ಪುತ್ತಿಸೆದಿರ್ಕ
ಪಾನುಂಗಲ್ಲನಾಡು ಸು
ನ್ದರ ಶೋಭೋತ್ತಮದಕ್ಕೆ ಮೂಗೆನಿಸು
ಗುಂ ಬಂಕಾರಪುರಪಟ್ಟಣಂ ತ
ತ್ಪುರಾಭರಣಂ ತಾನೆನಲಿಂದ್ರವಲ್ಲಭಂ ಶಿವಾ
ವಾಸಂ ಜಗನ್ಮಣ್ಡನಂ ॥[14]

ಎಂದು ವರ್ಣಿಸಲಾಗಿದೆ. ಚಾಲುಕ್ಯ ತ್ರೈಲೋಕ್ಯಮಲ್ಲ (ಸೋಮೇಶ್ವರ ೧), ಭುವನೈಕಮಲ್ಲ (ಸೋಮೇಶ್ವರ ೨), ತ್ರಿಭುವನಮಲ್ಲ (ವಿಕ್ರಮಾದಿತ್ಯ ೪)—ಈ ಮೂವರು ದೊರೆಗಳ ಕಾಲದಲ್ಲಿಯೂ ಇಂದ್ರೇಶ್ವರ ದೇವಸ್ಥಾನದ ಖ್ಯಾತಿ ಹಬ್ಬಿತ್ತು. ಭುವನೈಕಮಲ್ಲನ ರಾಜಗುರುವೆನಿಸಿದ ರಾಜಗುರುದೇವ 'ಶ್ರೀಮದ್ಬಂಕಾಪುರದಿಂದ್ರೇಶ್ವರ ದೇವರ್ಗಾಳ್ವ ಪನ್ನೆರಡು ಬಾಡಂ' ಸಂತೋಷದಿಂ ಆಳುತ್ತಲಿದ್ದ.[15] ಕ್ರಿ. ಶ. ೧೦೪೫[16] ಮತ್ತು ಕ್ರಿ.ಶ. ೧೦೮೫–೮೬ ರ[17] ಕೋಳೂರು ಶಾಸನಗಳು, ಕ್ರಿ.ಶ. ೧೦೬೨ ರ ಬಂಕಾಪುರ ಶಾಸನವು[18] 'ಶ್ರೀ ವರುಣಶಿವ ಪಂಡಿತದೇವರ್' ಎಂಬವರನ್ನು ಗುರುದೇವ ಎಂದು ಕರೆದಿವೆ. 'ಕೊಂಕಣರಕ್ಷಾಳಂ ಕದಂಬಾನ್ವಯ ಸಮುದ್ಧರಣ'ರೆಂಬ ಬಿರುದು ಇವರಿಗಿತ್ತು. ಕರ್ಜಗಿ ತಾಲೂಕಿನ ಕೋಳೂರಿನಲ್ಲಿ ದೊರೆಯುವ ಆರು ಶಾಸನಗಳಲ್ಲಿ ಇಂದ್ರೇಶ್ವರ ದೇವಸ್ಥಾನಕ್ಕೆ ಸಂಬಂಧಿಸಿದ

8 ಅದೇ
9 ಎಸ್. ಆಯ್. ಆಯ್., ೧೮, ೬೬ ಬಂಕಾಪುರ (ಕ್ರಿ.ಶ. ೧೦೬೨)
10 ಎ. ಇ., ೧೯, ೨೯ ಕೋಳೂರ (ಕ್ರಿ.ಶ. ೧೦೭೯)
11 ಎಸ್. ಆಯ್. ಆಯ್., ೧೮, ೨೯೧ ಬಂಕಾಪುರ
12 ಅದೇ, ೧೫೯ ಹಾವೇರಿ (ಕ್ರಿ.ಶ. ೧೧೫೭)
13 ಎ. ಆರ್. ಎಸ್. ಆಯ್. ಇ., ೧೯೪೪–೪೫, ೬ ಬಂಕಾಪುರ (ಕ್ರಿ.ಶ.೧೨೫೮)
14 ಎಸ್. ಆಯ್. ಆಯ್., ೧೮, ೨೯೧ ಬಂಕಾಪುರ
15 ಅದೇ, ೬೬, ಬಂಕಾಪುರ (ಕ್ರಿ. ಶ. ೧೦೬೨)
16 ಎ. ಇ., ೧೯, ೨೯ ಕೋಳೂರು
17 ಅದೇ
18 ಎಸ್. ಆಯ್. ಆಯ್., ೧೮, ೬೬ ಬಂಕಾಪುರ

೨ ಶಾಸನಗಳು ರಾಜಗುರುದೇವರಿಗೆ ಸಂಬಂಧಿಸಿರುವುದರಿಂದ, ಇಂದ್ರೇಶ್ವರ ದೇವರ ಭೋಗಕ್ಕೆ ಬಿಟ್ಟ ೧೨ ಹಳ್ಳಿಗಳಲ್ಲಿ ಕೋಳೂರು ಗ್ರಾಮವೂ ಸೇರ್ಪಡೆಯಾಗಿರಬೇಕು. ಕೋಳೂರಿನ ೬ ಶಾಸನಗಳನ್ನು ಸಂಗ್ರಹಿಸಿ ಪ್ರಕಟಿಸಿದ ಬಾರ್ನೆಟರ ವಿಚಾರವೂ ಅದೇ ಆಗಿದೆ.[19]

ಹಾನಗಲ್ಲ ಕದಂಬರ ಕಾಲದಲ್ಲಿ ಇಂದ್ರೇಶ್ವರ ದೇವಾಲಯದ ಜವಾಬ್ದಾರಿಯನ್ನು ನಿರ್ವಹಿಸಿದ ಆಚಾರ್ಯರಾದ ಶ್ರೀ ಮದೆಕ್ಕೋಟಿಯ ಕುಮಾರ ಭುಜಬಳ ಚಕ್ರವರ್ತಿ ಸೋಮರಾವುಳ ಪಂಡಿತ[20] ಮತ್ತು ಶಿವಶಕ್ತಿದೇವ ಮುನಿಪ[21]ರನ್ನು ಬಂಕಾಪುರ ಶಾಸನ ಹೊಗಳಿದೆ. ಶಾಸನಗಳುದ್ದಕ್ಕೂ ಈ ಆಚಾರ್ಯರ ಭವ್ಯ ವ್ಯಕ್ತಿತ್ವ ತುಂಬಿ ನಿಂತಿದೆ. ಕ್ರಿ. ಶ. ೧೧೬೨ ರ ಶಾಸನದಲ್ಲಿ ಪೆರ್ಗಡೆ ಚಾವುಂಡಯ್ಯ ಇಂದ್ರೇಶ್ವರಪುರದ ಅಧಿಕಾರ ನೋಡುತ್ತಿದ್ದ.[22] ಇಂದ್ರೇಶ್ವರದ ಪಾದಮೂಲ ಪರಿವಾರದ ಸೂಳೆಯರಿಗೆ 'ಕೌಚೂರೊಳಗಾಗಿ ಪಲಸೂರು' ಬಿಟ್ಟಿದ್ದಂತೆ ತಿಳಿದುಬರುತ್ತದೆ.[23]

ಹೀಗೆ ವಿಭಿನ್ನ ರಾಜಕೀಯ ಮನೆತನಗಳ ಗೌರವ ಪಡೆದು ಮೆರೆದ ಆದರ ಸ್ಥಳವೂ ಈ ದೇವಸ್ಥಾನವೂ ಗೊತ್ತಾಗದಂತೆ ಇಂದು ನಾಶವಾಗಿ ಹೋಗಿವೆ. 'ಪ್ರಾಚೀನ ಕರ್ನಾಟಕದ ಪ್ರಮುಖ ಪಟ್ಟಣ ಹಾವೇರಿ' ಎಂಬ ಲೇಖನವನ್ನು ಬರೆಯುತ್ತ ಡಾ॥ ಶ್ರೀನಿವಾಸ ರಿತ್ತಿಯವರು, "ಹಾವೇರಿಯ ಶಾಸನಗಳಲ್ಲಿ ಸಿದ್ದೇಶ್ವರನೊಂದಿಗೆ ಇಂದ್ರೇಶ್ವರವೆಂಬ ದೇವತೆಯ ಹೆಸರೂ ಬರುತ್ತದೆ. ಆದರೆ ಹಾವೇರಿಯಲ್ಲಿ ಇಂದ್ರೇಶ್ವರ ದೇವಾಲಯವೆಂಬುದಲ್ಲಿಯೂ ಇಲ್ಲ. ಸಿದ್ದೇಶ್ವರ ದೇವಾಲಯದ ಬಳಿಯಲ್ಲಿದ್ದ ಒಂದೇ ಒಂದು ಗುಡಿ ಎಂದರೆ ನರಸಿಂಹದೇವರದು. ಆದರೆ ನರಸಿಂಹ ದೇವಾಲಯದ ಉಲ್ಲೇಖ ಯಾವ ಶಾಸನದಲ್ಲಿಯೂ ಸಿಗುವದಿಲ್ಲ. ಈ ಇಂದ್ರೇಶ್ವರ ದೇವರ ಉಲ್ಲೇಖ ಬಂಕಾಪುರದಲ್ಲಿ ಈಗಲೂ ಇರುವ ಇಂದ್ರೇಶ್ವರ ದೇವರಿಗೆ ಸಂಬಂಧಿಸಿದುದಿರಬೇಕು ಎಂದು ಶ್ರೀ ಬೆಂಗೇರಿಯವರು ಅಭಿಪ್ರಾಯ ಪಡುತ್ತಾರೆ. ಆದರೆ ಈ ಅಭಿಪ್ರಾಯ ಸರಿಯಾದುದಲ್ಲವೆಂದು ತೋರುತ್ತದೆ. ಯಾಕೆಂದರೆ ಇಂದ್ರೇಶ್ವರನ ಉಲ್ಲೇಖವಿರುವ ಹಾವೇರಿಯ ಎರಡು ಶಾಸನಗಳಲ್ಲಿ ಬಂಕಾಪುರದ ಹೆಸರೇ ಇಲ್ಲ. ಅಲ್ಲದೆ ಒಂದರಲ್ಲಿ 'ರತ್ನಭಟ್ಟದಂಗನಾಯಕರು ವಾರರಗವಲ್ಲಿಯ ಸಿದ್ದೇಶ್ವರದೇವರ್ಗ್ಗೆ ಇಂದ್ರೇಶ್ವರ ದೇವರ್ಗೆ' ಎಂದು ಹೇಳಿರುವುದರಿಂದ ಈ ಇಬ್ಬರೂ ದೇವತೆಗಳು ಹಾವೇರಿಯಲ್ಲಿಯೆ ಇದ್ದಿರಬೇಕೆಂದು ಹೇಳಿರುವುದರಿಂದ ಈ ಇಬ್ಬರೂ ದೇವತೆಗಳು ಹಾವೇರಿಯಲ್ಲಿಯೆ ಇದ್ದಿರಬೇಕೆಂದು ಸೂಚಿತವಾಗುತ್ತದೆ. ಇನ್ನೊಂದು ಶಾಸನದಲ್ಲಿ 'ಇಂದ್ರೇಶ್ವರ ಹಾವೇರಿಯ ನಾಲ್ನೂರ್ವರು ಮಹಾಜನರಿಗೆ ಕರುಣಿಸಲಿ' ಎಂದು ಪ್ರಾರ್ಥಿಸಲಾಗಿದೆ. ಆದ್ದರಿಂದ ಸಿದ್ದೇಶ್ವರ ದೇವಾಲಯದ ಪಕ್ಕದಲ್ಲಿಯೆ ಇಂದ್ರೇಶ್ವರ ದೇವಾಲಯವೂ ಇದ್ದಿರಬೇಕು. ಕಾಲಕ್ರಮೇಣ ಅದು ಇನ್ನೊಂದು ದೇವತೆಯ ಆಲಯವಾಗಿ ಮಾರ್ಪಟ್ಟಿರಬೇಕು" ಎಂದು ಹೇಳಿರುವರು [24] ಡಾ॥ ರಿತ್ತಿಯವರ ಹೇಳಿಕೆಯ ಪ್ರಕಾರ ಹಾವೇರಿಯಲ್ಲಿಯೂ ಒಂದು ಇಂದ್ರೇಶ್ವರ ದೇವಾಲಯವಿದ್ದಿರಬಹುದು. ಇದರಿಂದ ಬಂಕಾಪುರದ ಇಂದ್ರೇಶ್ವರ ದೇವಾಲಯ ಭಿನ್ನವಾದುದು. ಬೆಂಗೇರಿಯವರು ಬಂಕಾಪುರದಲ್ಲಿ 'ಈಗಲೂ ಇರುವ ಇಂದ್ರೇಶ್ವರ ದೇವರು' ಎಂದು ಹೇಳುವುದರಿಂದ ಅವರ ತಲೆಮಾರಿನಲ್ಲಿ ಈ ದೇವಾಲಯದ ಅಸ್ತಿತ್ವವಾಗಲಿ, ಅವಶೇಷವಾಗಲಿ ಇದ್ದಿರಬೇಕು. ಆದರೆ ಈಗ ಈ ಹೆಸರೂ ಗ್ರಾಮಸ್ಥರಿಗೆ ಗೊತ್ತಿಲ್ಲ.

---

19 ಎ. ಇ., ೧೯, ೨೯, ಮುನ್ನುಡಿ

20 ಎಸ್. ಆಯ್. ಆಯ್., ೧೮, ೨೯೧ ಬಂಕಾಪುರ

21 ಅದೇ

22 ಅದೇ, ೬೭ ಬಂಕಾಪುರ

23 ಅದೇ

24 ಪ್ರಬುದ್ಧ ಕರ್ಣಾಟಕ, ಸಂಪುಟ ೪೧, ಸಂಚಿಕೆ ೨, ಪು. ೬೩-೭೧

ಆದರೆ ಇತ್ತೀಚೆಗೆ ನನಗೆ ದೊರೆತ ಸ್ತಂಭಶಾಸನದಿಂದ ಇಂದ್ರೇಶ್ವರ ದೇವಾಲಯದ ಬಗೆಗೆ ಹೆಚ್ಚಿನ ಮಾಹಿತಿ ಸಿಕ್ಕು ಅದರ ಸ್ಥಾನವನ್ನು ಪತ್ತೆ ಹಚ್ಚಬಹುದಾಗಿದೆ.

ಬಂಕಾಪುರದ ಸುಪ್ರಸಿದ್ಧ ಕೋಟೆಯ ಒಳಗಿರುವ ಸರಕಾರಿ ಪಶು ಸಂಗೋಪನ ಕೇಂದ್ರ ಕಚೇರಿಯ ಮುಂಭಾಗದ ಇಕ್ಕೆಲಗಳಲ್ಲಿ ಸುಮಾರು ಮೂರು ಪೂಟು ಎತ್ತರ,ಒಂದುವರೆ ಪೂಟು ಅಗಲದ ಎರಡು ಕಂಬಗಳಿವೆ. ಸ್ತಂಭಗಳ ಕೆಳಭಾಗ ಚೌಕೋನಾಕಾರವಾಗಿದ್ದು ಮೇಲ್ಭಾಗ ವೃತ್ತಾಕಾರವಾಗಿದೆ. ಇವುಗಳಲ್ಲಿ ಒಂದು ಕಂಭದ ಕೆಳಭಾಗದಲ್ಲಿ ಒಂದು ಭಾಗವನ್ನು ಬಿಟ್ಟು ಮಿಕ್ಕ ಮೂರು ಮುಖಗಳಲ್ಲಿ ಇಂದ್ರೇಶ್ವರನಿಗೆ ಸಂಬಂಧಿಸಿದ ಒಂದು ಶಾಸನವಿದ್ದು, ಅದರ ಪೂರ್ಣಪಾಠ[25] ಹೀಗಿದೆ :

೧ ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೆ ತ್ರೈಲೋಕ್ಯ ನಗರಾರಂಭ
ಮೂಲಸ್ತಂಭಾಯ ಶಂಭವೇ ॥
೨ ಸ್ವಸ್ತಿ । ಸಮಧಿಗತ ಪಂಚಮಹಾಶಬ್ದ ಮಹಾಮಂಡಳೇಶ್ವರಂ ಬನವಾಸಿ ಪುರವರಾಧೀ
೩ ಸ್ವರಂ ಶ್ರೀ ಸಪ್ತಕೋಟೀಶ್ವರದೇವರ ಲಬ್ಧವರಪ್ರಸಾದ ಕಾದಂಬಕುಲತಿಲಕ ಭು
೪ ಜಬಲ ಕ್ಷತ್ರಿಯೋತ್ತಮ ಶಿವಚಿತ್ತವೀರ ಚಟ್ಟಯ್ಯದೇವರಸರ ರಾಜ್ಯೋದಯದ ನಾ
೫ ಲ್ಕನೆಯ ಕಾಳಯುಕ್ತ ಸಂವತ್ಸರದ ಆಶ್ವಯುಜ ಬಹುಟ ಅಷ್ಟಮಿ ಆದಿತ್ಯ
೬ ವಾರ ಬ್ಯತಿಪಾತದಂದು × ಸ್ವಸ್ತಿ ಸಮಧಿಗತಿ ಪಂಚಮಹಾಶಬ್ದ ಮಂ
೭ ಹಾ ಮಂಡಲೇಶ್ವರಂ ಕಂಧೋರ ಪುರವರಾಧೀಶ್ವರಂ ಶ್ರೀ ಶೂರ್ಯ್ಯ ವಂ
೮ ಶೋದ್ಭವ ಕುಲತಿಲಕ ಕಾಸ್ಯಪಗೋತ್ರಪವಿತ್ರ ಕಲಿಕಾಲ
೯ ಚೋಳಾನ್ವಯಂ ನಾಮಾದಿ ಪ್ರಶಸ್ತಿಸಹಿತಂ ಶ್ರೀಮದುತ್ತಮ .. ನಂಡೆ ಚೋಳಮಹಾ
೧೦ ರಾಜ[ಕು]ಮಾರ ಮಲ್ಲದೇವರಸರು ರಾಜಧಾನಿ ಜೊಂನ್ನವಳ್ಳಿಯ ? ಪಾಳೆಯದ
೧೧ ಲು ಸುಖಸಂಕಥಾವಿನೋದದಿಂ ರಾಜ್ಯಂಗೆಯುತ್ತಮಿರ್ದು ಹಾನುಂಗಲ್ಲ ನಾಡೊ
೧೨ ಳಗಣ ಶ್ರೀಮದಿಂದ್ರ[ವ]ಲ್ಲಭ ರಾಜಧಾನಿ ಪಟ್ಟಣಂ ಬಂಕಾಪುರದ ಶ್ರೀಮದಿಂ
೧೩ ದ್ರೇಸ್ವರದೇವರ ಅಂಗಭೋಗ ಧರ್ಮಕಾರ್ಯ್ಯಕೆಂದು ಶ್ರೀ [ಚ]
೧೪ ಟ್ಟಯ್ಯದೇವರ್ಸಗ್ಗೆ ಪದ್ಮಲದೇವಿಯಗ್ಗೆ ಮಹಾರಾಜ್ಯಾಭ್ಯು[ದ]
೧೫ ಯಾರ್ತ್ಥವಾಗಿ ಸ್ವಸ್ತಿ ಯಮನಿಯಮ ಸ್ವಾಧ್ಯಾಯ [ಧ್ಯಾ]
೧೬ ನಾಧಾರಣ ಮೋನಾನುಷ್ಟಾನ ಜಪ ಸಮಾಧಿ ಸೀಲ [ಗು]
೧೭ ಣ ಸಂಪನ್ನರುಂ ಆಹಾರಾಭಯಭೈಷಜ್ಯ ಶಾಸ್ತ್ರದಾ[ನ]
೧೮ ವಿನೋದರುಂ . . . ಶಂಭು ಪಾರಾಯಣ ಕಾಣ? . . .

25 ಅಪ್ರಕಟಿತಶಾಸನ

೧೯ ...................................................

೨೦ ...................................................

೨೧ ...................................................

೨೨ ನಿಘಂಟಣಕಾರ ಕಾಬ್ಯನಾಟಕ ಭರತ ವಾತ್ಸಾಯನ ಶಬ್ದ

೨೩ ಸ್ಮೃತಿ ಮೊದಲಾಗಿ ಅನೇಕ ವಿದ್ಯಾಪಾರಾವಾರರುಂ ವಿಭೂ ?

೨೪ ಳಿತ ಜಟಾಜೂಟ ಲಾಕುಳೋದ್ಧರಣ ಪರಿಣತಾಂರ್ತಕರ

೨೫ ಣರುಂ ಧರ್ಮಲತಾಧಾರದಂಡರುಂ ನಿರ್ಮ್ಮಳವಾಚಾ ಪ್ರಚಂಡರುಂ

೨೬ ಸತ್ಯವಾಕ್ಯಮಳೀನೀ ಮಾರ್ತ್ತಂಡರುಂ ಸಕಲಶಾಸ್ತ್ರಾಂಗ ವಿಚಾರ

೨೭ ಚದುರರುಂ ಸಾಹಿತ್ಯವಿದ್ಯಾಧರರುಂ ಚಾರಿತ್ರನಿರತರುಂ ಶ್ರೋ

೨೮ ತ್ರಿಯಾನ್ವಯು ಪವಿತ್ರಾಂಬೋಧಿವರ್ದ್ಧನ ಸುಧಾಕರರುಂ

೨೯ ಶ್ರೀ ಯಿಂದ್ರೇಶ್ವರ ದೇವಾವಲೋಕನೋದ್ಭವೋದ್ಭೂತರೋ

೩೦ ಮಾಂಚ ಕಂಚುಗಿತಗಾತ್ರರುಮಪ್ಪ ಶ್ರೀ ಸೋಮರಾ

೩೧ ವುಳದೇವರ ಕುಮಾರ ಶ್ರೀ ಸೂಕ್ಷ್ಮಶಿವದೇವರ ಬ್ರಹ್ಮಶಿವದೇ[ವರ]

೩೨ ಕಾಲಂಕರ್ಚಿ ಕೈಧಾರೆಯುಂ ಮಾಡಿ ಹಲಸಿಗೆ ಹಂನಿತ್ಸಾಸಿರ

೩೩ ದಪೊಳಗಣ ತಂಬುಪೂರ ಹಂನೆರಡಲು ಬಳಿಯ ಬಾಡ ಕೆಸರ

೩೪ ಹಳ್ಳಿಯು ಚತುರಾಘಂಟ ಸಮೇತನಾಗಿ ಸರ್ವನಮಸ್ಯಂ ಬಿಟ್ಟ ?

೩೫ ಆ ಕೆಸಱಹಳ್ಳಿಯು ಸೀಮೆಪೂರಿಂ ಯಿಸಾನ್ಯದಲು ಮಡ ?

೩೬ ಮೊಟ್ಟೆಯಲ್ಲಿ ತೆಂಕ ಮುಂದಾಗಿ ಹರಿದ ವುಳುಮೆಯು ತೊಱೆ

೩೭ ಯದಲ್ಲಿ ತೊಱೆಯು ಕೂಡಿದ ಕಾಂಚಿವಾಳದ ಹಳ್ಳ ಅಲ್ಲಿ ನಟ್ಟ ಲಿಂಗಮುದ್ರೆ

೩೮ ಯು ಕಲ್ಲು ಆ ಹಳ್ಳವಿಡಿದು ಪಡುವ ಮುಂತಾಗಿ ಕೂಡಿದ ಹಬ್ಬ

೩೯ ಅಲ್ಲಿಂ ಮುಂದೆ ಪಂಚಲಿಂಗದೇವರ ಕೆಯ್ಯ ನಟ್ಟಕಲ್ಲು ಮಾತ್ತಂ ಆ

೪೦ ಅಲ್ಲಿಂ ಮುಂದು ಬಂದ ಬಚಲ ಹೆಬ್ಬದುವಿನ ನಟ್ಟಕಲ್ಲು ಅಲ್ಲಿಂ ಪ

೪೧ [ಡು]ವಲು ಮಸಣಕೆ[ಱ]ದೇವಿಯು ಬಲದ ದೆಸೆಯು ಹಿರಿಯು

೪೨ ಕಂತೆಯು ಮರನ? ತುಂಬು ಆ ತುಂಬುವಿಡಿದು ಕೆಱೆಯ ನಡುವಣ [ಪಡುವಲ

೪೩ ತಾಗಿ ನೈರುತ್ಯದಲ್ಲಿ ಕೆಸಱಹಳ್ಳಿಯು ಕಾರುಗೋಡಸೀಮೆಗೆ ನಟ್ಟಕಲ್ಲು ಅಲ್ಲಿಂ

೪೪ ಬಡಗಲು ತಾಗಿ ನಟ್ಟಕಲ್ಲು ಅಲ್ಲಿಂದಂ ಬಡಗಲು ವಾಯುವ್ಯದಲ್ಲಿ ತೇಗಿನಮೊರ

೪೫ ಡಿ ಮೊರಡಿಯ ಮೂಡಲು ಕೆಸಱಹಳ್ಳಿಯು ಜೂಜನಹಳ್ಳಿಯು ಸೀಮೆ

೪೬ ಮೂಡಲು ನಟ್ಟಕಲ್ಲು ಅಲ್ಲಿಂ ಮೂಡಲು ಜಂಬೆಗಲ್ಲಿನ ಕೆಱೆಯಲ್ಲಿಂ ಮೂಡ

೪೭ ಲ್ಲಿಂ ನಟ್ಟಕಲ್ಲು ಅಲ್ಲಿಂ ಮೂಡಲು ಹಡಪದ ಸೋಮನಕೊಳ ಅಲ್ಲಿಂ ಮೂಡಲು

೪೮ ಯ ಕೊಳ ಅಲ್ಲಿಂ ಮೂಡಲು ಈಶಾನ್ಯದ ........................

(ಮುಂದೆ ತ್ರುಟಿತ)

'ಹಾನುಗಲ್ಲ ನಾಡೊಳಗಣ ಶ್ರೀಮದಿಂದ್ರವಲ್ಲಭ ರಾಜಧಾನಿ ಪಟ್ಟಣ ಬಂಕಾಪುರದ ಶ್ರೀಮದಿಂದ್ರೇಶ್ವರ ದೇವರ ಅಂಗಭೋಗ ಧರ್ಮ ಕಾರ್ಯಕೆನ್ದು ಶ್ರೀ ಚಟ್ಟಯ್ಯದೇವರಸರ್ಗ ಪದ್ಮಲದೇವಿಯರ್ಗ್ಗೆ ರಾಜ್ಯಾಭ್ಯುದಯಾರ್ಥ'ವಾಗಿ ಕೆಸರಹಳ್ಳಿಯನ್ನು ದತ್ತಿಬಿಟ್ಟುದು ಪ್ರಸ್ತುತ ಶಾಸನದ ವಿಷಯ.

ಈ ಶಾಸನ ಮತ್ತು ಇದರ ಎಡಬಲದಲ್ಲಿ ದೊರೆತ ಇನ್ನೂ ಕೆಲವು ಪ್ರಾಚೀನ ಅವಶೇಷಗಳ ಆಧಾರದಿಂದ ಇಂದ್ರೇಶ್ವರ ದೇವಾಲಯವು ಈ ಕೋಟೆಯ ಪರಿಸರದಲ್ಲಿಯೆ ಇದ್ದಿರಬೇಕೆನಿಸುತ್ತದೆ. ಉತ್ಖನನದ ಮೂಲಕ ಹೆಚ್ಚಿನ ಶೋಧ ನಡೆಸಬೇಕಿದೆ.